# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತ್ತಿಲ್ಲದ ಪ್ರಶ್ನೆ ಸಂಖ್ಯೆ | 474 |
| ಸದಸ್ಯರ ಹೆಸರು | ಶ್ರೀ.ಕೆ.ಸಿ.ಕೊಂಡಯ್ಯ |
| ಉತ್ತರಿಸುವ ದಿನಾಂಕ | 22.07.2019 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅಧಿಕ ಇಳುವರಿ ಪಡೆಯುವ ಉದ್ದೇಶದಿಂದ ರೈತರು ಅಧಿಕ ಪ್ರಮಾಣದಲ್ಲಿ ಕೀಟನಾಶಕ ಮತ್ತು ರಸಗೊಬ್ಬರಗಳನ್ನು ಬಳಕೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದಲ್ಲಿ ಕೃಷಿ ವಿಶ್ವವಿದ್ಯಾನಿಲಯಗಳ ಸಂಶೋಧನೆ ಮೇರೆಗೆ ಬೆಳೆವಾರು ಮಾಡಿರುವ ಶಿಫಾರಸ್ಸಿನಂತೆ ರಸಗೊಬ್ಬರಗಳನ್ನು ಬಳಕೆ ಮಾಡಲಾಗುತ್ತಿದೆ. ಕೇಂದ್ರ ಸರ್ಕಾರದನ್ವಯ ಸಾರಜನಕ, ರಂಜಕ ಹಾಗು ಪೊಟ್ಯಾಷ್ ರಸಗೊಬ್ಬರಗಳ ಬಳಕೆ ಪ್ರಮಾಣವು 4:2:1 ಅನುಪಾತದಲ್ಲಿದ್ದರೆ ಅದನ್ನು ಸಮತೋಲನ ರಸಗೊಬ್ಬರ ಬಳಕೆ ಪ್ರಮಾಣ ಎಂದು ಗುರುತಿಸಲಾಗಿದೆ. ಅದರಂತೆ ರಾಜ್ಯದಲ್ಲಿ ಒಟ್ಟಾರೆ ಸಾರಜನಕ, ರಂಜಕ ಹಾಗು ಪೊಟ್ಯಾಷ್ ಬಳಕೆಯ ಪ್ರಮಾಣವು 3.05:1.75:1.0 ಅನುಪಾತದಲ್ಲಿದ್ದು ಮಿತಿಯಲ್ಲಿಯೇ ಬಳಕೆಯಾಗುತ್ತಿರುತ್ತದೆ. ಆದರೆ ಕೆಲವು ಜಿಲ್ಲೆಗಳಲ್ಲಿ ಮಾತ್ರ ನೀರಾವರಿ ಪ್ರದೇಶಗಳಲ್ಲಿ ಹೆಚ್ಚಿನ ಇಳುವರಿ ಪಡೆಯುವ ಉದ್ದೇಶದಿಂದ ರೈತರು ಶಿಫಾರಸ್ಸಿನ ಪ್ರಮಾಣಕ್ಕಿಂತ ಅಧಿಕ ಪ್ರಮಾಣದಲ್ಲಿ ಕೀಟನಾಶಕ ಮತ್ತು ರಸಗೊಬ್ಬರಗಳನ್ನು ಬಳಕೆ ಮಾಡುತ್ತಿರುವುದು ಸಾಮಾನ್ಯವಾಗಿ ಕಂಡುಬರುತ್ತದೆ. |
| ಆ) | ಅಧಿಕ ಪ್ರಮಾಣದಲ್ಲಿ ರಸಗೊಬ್ಬರ ಮತ್ತು ಕ್ರಿಮಿನಾಶಕಗಳನ್ನು ಬಳಕೆ ಮಾಡುತ್ತಿರುವುದರಿಂದ ಜನರ ಆರೋಗ್ಯದ ಮೇಲೆ ಉಂಟಾಗುತ್ತಿರುವ ದುಷ್ಪರಿಣಾಮಗಳು ಯಾವುವು; ಇದು ಸರ್ಕಾರದ ಅರಿವಿಗೆ ಬಂದಿದೆಯೇ; | ಅಧಿಕ ಪ್ರಮಾಣದಲ್ಲಿ ರಸಗೊಬ್ಬರ ಮತ್ತು ಕ್ರಿಮಿನಾಶಕಗಳನ್ನು ಬಳಕೆ ಮಾಡುತ್ತಿರುವುದರಿಂದ ಜನರ ಆರೋಗ್ಯದ ಮೇಲೆ ದುಷ್ಪರಿಣಾಮಗಳು ಉಂಟಾಗುತ್ತಿರುವ ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. |
| ಇ) | ಜನರ ಆರೋಗ್ಯದ ರಕ್ಷಣೆಯ ದೃಷ್ಟಿಯಿಂದ ರಸಗೊಬ್ಬರ ಮತ್ತು ಕ್ರಿಮಿನಾಶಕಗಳ ಬಳಕೆಯ ಬಗ್ಗೆ ರೈತರಿಗೆ ತಿಳುವಳಿಕೆಯನ್ನುಂಟು ಮಾಡುವ ಕಾರ್ಯಕ್ರಮಗಳನ್ನು ಸರ್ಕಾರದ ವತಿಯಿಂದ ಹಮ್ಮಿಕೊಳ್ಳಲಾಗಿದೆಯೇ? | ಶಿಫಾರಸ್ಸಿನ ಪ್ರಮಾಣದಲ್ಲಿ ರಸಗೊಬ್ಬರ ಮತ್ತು ಪೀಡೆನಾಶಕಗಳನ್ನು ಬಳಸುವಂತೆ ಕೃಷಿ ಅಭಿಯಾನಗಳ ಮುಖಾಂತರ, ಜಿಲ್ಲಾ ಕೃಷಿ ತರಬೇತಿ ಕೇಂದ್ರಗಳಲ್ಲಿ ರೈತರಿಗೆ ತರಬೇತಿ ನೀಡುವ ಮುಖೇನ ಮತ್ತು ಕ್ಷೇತ್ರೋತ್ಸವಗಳಲ್ಲಿ ಅರಿವು ಮೂಡಿಸಲಾಗುತ್ತಿದೆ. ಮಾಧ್ಯಮಗಳ ಮುಖಾಂತರವೂ ಸಹ ಶಿಫಾರಸ್ಸಿನ ಪ್ರಮಾಣದಲ್ಲಿ ರಸಗೊಬ್ಬರ ಮತ್ತು ಪೀಡೆನಾಶಕಗಳನ್ನು ಬಳಸಲು ರೈತರಿಗೆ ಅರಿವು ಮೂಡಿಸಲಾಗುತ್ತಿದೆ.<br><br>ರಾಸಾಯನಿಕ ಪೀಡೆನಾಶಕಗಳ ಅವ್ಯೆಜ್ಞಾನಿಕ ಬಳಕೆಯಿಂದ ಸಂಭವಿಸಬಹುದಾದ ದುಷ್ಪರಿಣಾಮಗಳನ್ನು ತಡೆಯಲು ಸುರಕ್ಷಿತ ಕೀಟನಾಶಕಗಳ ಬಳಕೆ ಕುರಿತ ತರಬೇತಿ ಕಾರ್ಯಕ್ರಮವನ್ನು ಹೋಬಳಿ ಮಟ್ಟದಲ್ಲಿ ರೈತರಿಗೆ ಹಾಗೂ ಪರಿಕರ ಮಾರಾಟಗಾರರಿಗೆ ನೀಡಲಾಗುತ್ತಿದೆ.<br><br>ರಾಸಾಯನಿಕ ಪೀಡೆನಾಶಕ ಬಳಕೆಯಲ್ಲಿ ವಹಿಸಬೇಕಾದ ಮುಂಜಾಗೃತಾ ಕ್ರಮಗಳ ಮಾಹಿತಿಯ ಬಗ್ಗೆ ಕಾರ್ಯಕ್ರಮಗಳನ್ನು ದೂರದರ್ಶನದ ಮೂಲಕ ಆಯೋಜಿಸಿ ರೈತರಿಗೆ ತಿಳುವಳಿಕೆ ನೀಡಲಾಗುತ್ತಿದೆ.<br><br>ರಾಸಾಯನಿಕ ಪೀಡೆನಾಶಕಗಳ ಬಳಕೆಯನ್ನು ಮಿತಿಗೊಳಿಸಲು ಹಾಗೂ ಜೈವಿಕ ಪೀಡೆನಾಶಕಗಳನ್ನು ಉತ್ತೇಜಿಸಲು, ಅನುದಾನದ ಲಭ್ಯತೆಗೆ ಅನುಗುಣವಾಗಿ, ಶೇ. 50 ರ ರಿಯಾಯಿತಿಯಲ್ಲಿ ಜೈವಿಕ ಪೀಡೆನಾಶಕಗಳನ್ನು ರೈತರಿಗೆ ನೀಡಲಾಗುತ್ತಿದೆ. |

ಸಂಖ್ಯೆ: AGRI-ACT/66/2019

(ಎನ್.ಹೆಚ್.ಶಿವಶಂಕರರೆಡ್ಡಿ)
ಕೃಷಿ ಸಚಿವರು

LCQ 642

ಅನುಬಂಧ-1ಅ

# 2019-20ನೇ ಸಾಲಿನಲ್ಲಿ ರಾಯಚೂರು ಜಿಲ್ಲೆಗೆ ಕೃಷಿ ಇಲಾಖೆಯಿಂದ ಜಾರಿಗೊಂಡಿರುವ ಯೋಜನೆಗಳು ಹಾಗೂ ಈ ಯೋಜನೆಗಳಿಗೆ ನೀಡಿರುವ ಅನುದಾನದ ವಿವರ (ರೂ.ಲಕ್ಷಗಳು)

| ಕ್ರ.ಸಂ. | ಯೋಜನೆಯ ಹೆಸರು | ನೀಡಿರುವ ಅನುದಾನ |
|---|---|---|
| | **ಸಸ್ಯ ಸಂಗೋಪನೆ** | |
| I | **ರಾಜ್ಯ ವಲಯ ಯೋಜನೆಗಳು** | |
| 1 | **ಕೃಷಿ ಆಯುಕ್ತಾಲಯ** | |
| ಅ | ವಾಹನ ಬಾಡಿಗೆ, ಪೀಠೋಪಕರಣಗಳ ಖರೀದಿ, ಬಾಡಿಗೆ ಹಾಗೂ ಇತರೆ ವೆಚ್ಚಗಳು | 4.000 |
| ಆ | ಗಣಕ ಕೇಂದ್ರ ಮತ್ತು CUG | 1.16 |
| ಇ | ಕೃಷಿ ವಿಸ್ತರಣೆ | 1.04 |
| ಈ | ಕಟ್ಟಡ ವೆಚ್ಚಗಳು | 0.00 |
| ಉ | ಕಟ್ಟಡಗಳ ನಿರ್ವಹಣೆ | 0.00 |
| | **ಕೃಷಿ ಆಯುಕ್ತಾಲಯ ಒಟ್ಟು** | **6.20** |
| II | **ಕೃಷಿ ಪರಿಕರಗಳು ಮತ್ತು ಗುಣಮಟ್ಟ ನಿಯಂತ್ರಣ** | |
| ಅ | ಬೀಜಗಳ ಪೂರೈಕೆ | 277.84 |
| ಆ | ಕೃಷಿ ಯಾಂತ್ರೀಕರಣ | 99.84 |
| ಇ | ಕೃಷಿ ಉತ್ಪನ್ನಗಳ ಸಂಸ್ಕರಣೆ | 103.99 |
| ಈ | ಮಣ್ಣು ಆರೋಗ್ಯ ಕೇಂದ್ರಗಳು | 14.09 |
| ಉ | ಕೀಟನಾಶಕ ನಿಯಂತ್ರಣ ಪ್ರಯೋಗಾಲಯ | 15.20 |
| ಊ | ಕೃಷಿ ಬಾಗ್ಯ | 113.67 |
| | **ಕೃಷಿ ಪರಿಕರಗಳು ಮತ್ತು ಗುಣಮಟ್ಟ ನಿಯಂತ್ರಣ ಒಟ್ಟು** | **624.63** |
| IV | **ಸಾವಯವ ಕೃಷಿ-ಶೂನ್ಯ ಬಂಡವಾಳ ನೈಸರ್ಗಿಕ ಕೃಷಿ** | **23.00** |
| V | **ಕೃಷಿ ವಿಸ್ತರಣೆ ಮತ್ತು ತರಬೇತಿ** | |
| ಅ | ಕೃಷಿ ಮೇಳಗಳು ಮತ್ತು ವಸ್ತು ಪ್ರದರ್ಶನ | 0.80 |
| ಆ | ವಿಸ್ತಣಾಧಿಕಾರಿಗಳ/ರೈತರ ತರಬೇತಿ ಕಾರ್ಯಕ್ರಮ | 0.58 |
| ಇ | ಜಿಲ್ಲಾ ಕೃಷಿ ತರಬೇತಿ ಕೇಂದ್ರಗಳ ನಿರ್ವಹಣೆ | 2.00 |
| ಈ | ರೈತ ಸಂಪರ್ಕ ಕೇಂದ್ರಗಳಿಗೆ ಹೊರಗುತ್ತಿಗೆ ಆಧಾರದ ಮೇರೆಗೆ ಸಿಬ್ಬಂದಿಗಳ ನಿಯೋಜನೆ | 12.75 |
| ಉ | ಕೃಷಿ ಅಭಿಯಾನ | 12.00 |
| | **ಕೃಷಿ ವಿಸ್ತರಣೆ ಮತ್ತು ತರಬೇತಿ ಒಟ್ಟು** | **28.13** |
| VI | **ಇತರೆ ಕೃಷಿ ಯೋಜನೆಗಳು** | |
| ಅ | ಸಮಿತಿ ಮತ್ತು ಸಲಹೆಗಳು | 0.20 |
| ಆ | ಆತ್ಮಹತ್ಯೆ ಕೈಗೊಂಡ ರೈತರಿಗೆ ಪರಿಹಾರಧನ | 65.00 |
| ಇ | ಹಾವು ಕಡಿತ | 6.00 |
| ಈ | ಬಣವೆ ನಷ್ಟ | 0.20 |

| ಕ್ರ.ಸಂ. | ಯೋಜನೆಯ ಹೆಸರು | ನೀಡಿರುವ ಅನುದಾನ |
|---|---|---|
| | ಇತರೆ ಕೃಷಿ ಯೋಜನೆಗಳ ಒಟ್ಟು | 71.40 |
| VII | ಕೃಷಿ ಬಾಗ್ಯ | 337.69 |
| VIII | ಕರ್ನಾಟಕ ರೈತ ಸುರಕ್ಷಾ ಪ್ರಧಾನ ಮಂತ್ರಿ ಫಸಲ್ ಬಿಮಾ ಯೋಜನೆ | 9.61 |
| IX | NMSA-ಮುಖ್ಯಮಂತ್ರಿಗಳ ಸೂಕ್ಷ್ಮ ನೀರಾವರಿ ಯೋಜನೆ | 25.00 |
| X | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013ರಡಿ ಬಳಕೆಯಾಗದೆ ಇರುವ ಮೊತ್ತ | 43.47 |
| | ಎಲ್ಲಾ ಒಟ್ಟು | 1169.12 |

ಕೃಷಿ ಆಯುಕ್ತರು

# ಅನುಬಂಧ - 1

## ಇನ್‌ಪುಟ್ ಸಬ್ಸಿಡಿ ವಿತರಣೆ

Rs in Lakhs

| | | ಮುಂಗಾರು ಬರ 2016-17 | | ಹಿಂಗಾರು ಬರ 2016-17 | | 2016-17 ಪ್ರವಾಹ | | 2017-18 ರಲ್ಲಿ ಬರ-ಪ್ರವಾಹ ಘೋಷಣೆಯಾಗಿಲ್ಲ | | ಮುಂಗಾರು ಬರ 2018-19 | | 2018-19 ಪ್ರವಾಹ | |
|---|---|---|---|---|---|---|---|---|---|---|---|---|---|
| ಕ್ರ ಸಂ | ಜಿಲ್ಲೆಗಳು | ಬಿಡುಗಡೆಯಾದ ಮೊತ್ತ | ಫಲಾನುಭವಿಗಳ ಸಂಖ್ಯೆ | ಬಿಡುಗಡೆಯಾದ ಮೊತ್ತ | ಫಲಾನುಭವಿಗಳ ಸಂಖ್ಯೆ | ಬಿಡುಗಡೆಯಾದ ಮೊತ್ತ | ಫಲಾನುಭವಿಗಳ ಸಂಖ್ಯೆ | | | ಬಿಡುಗಡೆಯಾದ ಮೊತ್ತ | ಫಲಾನುಭವಿಗಳ ಸಂಖ್ಯೆ | ಬಿಡುಗಡೆಯಾದ ಮೊತ್ತ | ಫಲಾನುಭವಿಗಳ ಸಂಖ್ಯೆ |
| 1 | ಬೆಂಗಳೂರು ನಗರ | 642.00 | 12322 | 3.00 | 86 | | | | | 55.99 | 1541 | | |
| 2 | ಬೆಂಗಳೂರು ಗ್ರಾಮಾಂತರ | 1819.00 | 38946 | 16.00 | 352 | | | | | 221.49 | 5518 | | |
| 3 | ಬಾಗಲಕೋಟೆ | 7270.00 | 98621 | 8013.00 | 95343 | | | | | 4275.45 | 44029 | | |
| 4 | ಬೆಳಗಾವಿ | 4961.00 | 90339 | 7298.00 | 107572 | | | | | 2480.71 | 27938 | | |
| 5 | ವಿಜಯಪುರ | 14722.00 | 198574 | 9285.00 | 128089 | | | | | 13266.68 | 130695 | | |
| 6 | ಬೀದರ್ | | | 0.00 | 0 | 9224.00 | 154566 | | | | | | |
| 7 | ಬಳ್ಳಾರಿ | 7396.00 | 90200 | 666.00 | 7766 | | | | | 8967.72 | 104488 | | |
| 8 | ಚಾಮರಾಜನಗರ | 2947.00 | 58965 | 1498.00 | 32066 | | | | | | | | |
| 9 | ಚಿತ್ರದುರ್ಗ | 15324.00 | 174205 | 915.00 | 14010 | | | | | 12974.31 | 143964 | | |
| 10 | ಚಿಕ್ಕಬಳ್ಳಾಪುರ | 4502.00 | 77276 | 14.00 | 266 | | | | | 3776.01 | 69803 | | |
| 11 | ಚಿಕ್ಕಮಗಳೂರು | 3176.00 | 47440 | 462.00 | 11322 | | | | | 1690.96 | 26402 | 15.48 | 15472 |
| 12 | ದಕ್ಷಿಣ ಕನ್ನಡ | | | 0.00 | 0 | | | | | | | 50.09 | 50058 |
| 13 | ಧಾರವಾಡ | 7492.00 | 91638 | 7444.00 | 94545 | | | | | 2089.69 | 21986 | | |
| 14 | ದಾವಣಗೆರೆ | 8833.00 | 108762 | 323.00 | 4523 | | | | | 4825.70 | 49140 | | |
| 15 | ಗದಗ | 11810.00 | 119310 | 12571.00 | 126801 | | | | | 6206.08 | 62170 | | |
| 16 | ಕಲಬುರಗಿ | | | 0.00 | 0 | 2550.00 | 71325 | | | | | | |
| 17 | ಹಾಸನ | 8213.00 | 156750 | 0.00 | 0 | | | | | 1655.77 | 32100 | 10.02 | 11772 |
| 18 | ಹಾವೇರಿ | 12663.00 | 147202 | 1366.00 | 18805 | | | | | 1889.32 | 22567 | | |
| 19 | ಕೊಪ್ಪಳ | 9442.00 | 106890 | 4815.00 | 49948 | | | | | 2434.16 | 27890 | | |
| 20 | ಕೊಡಗು | 226.00 | 6418 | 240.00 | 5818 | | | | | | | 47.96 | 34995 |
| 21 | ಕೋಲಾರ | 2790.00 | 59154 | 226.00 | 4796 | | | | | 2714.59 | 60340 | | |
| 22 | ಮೈಸೂರು | 4660.00 | 90917 | 881.00 | 18284 | | | | | | | | |
| 23 | ಮಂಡ್ಯ | 8266.00 | 150144 | 2315.00 | 55080 | | | | | 143.36 | 3218 | | |
| 24 | ರಾಮನಗರ | 5354.00 | 76516 | 656.00 | 12541 | | | | | | | | |
| 25 | ರಾಯಚೂರು | 2436.00 | 35060 | 6251.00 | 81606 | 40.00 | 351 | | | 7576.84 | 79592 | | |
| 26 | ಶಿವಮೊಗ್ಗ | 3960.00 | 74189 | 0.00 | 0 | | | | | | | 9.99 | 17081 |
| 27 | ತುಮಕೂರು | 13998.00 | 205674 | 34.00 | 563 | | | | | 7804.19 | 131496 | | |
| 28 | ಉತ್ತರ ಕನ್ನಡ | 1305.00 | 24438 | 0.00 | 0 | | | | | | | 16.94 | 28725 |
| 29 | ಉಡುಪಿ | | | 0.00 | 0 | | | | | | | 6.43 | 8632 |
| 30 | ಯಾದಗಿರಿ | 1223.00 | 18269 | 2352.00 | 36923 | | | | | 4176.75 | 46405 | | |
| | ಒಟ್ಟು | 165430.00 | 2358219 | 67644.00 | 907105 | 11814.00 | 226242 | | | 89225.75 | 1091282 | 156.91 | 166735 |

ಸೂಚನೆ: ಈ 2018-19 ಮುಂಗಾರು ಬರ ಹಾಗು ಪ್ರವಾಹ ಬಾಧಿತ ರೈತರಿಗೆ Input Subsidy ಪಾವತಿಸುವ ಕಾರ್ಯ ಪ್ರಗತಿಯಲ್ಲಿದ್ದು, ಫಲಾನುಭವಿಗಳ ಸಂಖ್ಯೆ ಹೆಚ್ಚಾಗಬಹುದು

## ಅನುಬಂಧ-೨

| ವರ್ಷ ಮತ್ತು ಹಂಗಾಮು | ನೋಂದಣಿಯಾದ ರೈತರ ಸಂಖ್ಯೆ(ಲಕ್ಷಗಳಲ್ಲಿ) | ಅರ್ಹ ರೈತರ ಸಂಖ್ಯೆ ಮತ್ತು ವಿಮಾ ಪರಿಹಾರ ಮೊತ್ತ | | ವಿಮಾ ಪರಿಹಾರ ಪಡೆದ ರೈತರ ಸಂಖ್ಯೆ ಮತ್ತು ಮೊತ್ತ | | ವಿಮಾ ಪರಿಹಾರ ಪಡೆದ ರೈತರ ಸಂಖ್ಯೆ ಮತ್ತು ಮೊತ್ತ | | ವಿಮಾ ಪರಿಹಾರ ಬಾಕಿ ಇರಲು ಕಾರಣ |
|---|---|---|---|---|---|---|---|---|
| | | ರೈತರ ಸಂಖ್ಯೆ | ವಿಮಾ ಪರಿಹಾರ ಮೊತ್ತ | ರೈತರ ಸಂಖ್ಯೆ | ವಿಮಾ ಪರಿಹಾರ ಮೊತ್ತ | ರೈತರ ಸಂಖ್ಯೆ | ವಿಮಾ ಪರಿಹಾರ ಮೊತ್ತ | |
| 2016ಮುಂಗಾರು | 943550 | 757702 | 994.17 | 645973 | 947.91 | 111729 | 46.26 | ಬ್ಯಾಂಕ್ ಖಾತೆ ಲಭ್ಯವಿಲ್ಲದ ಕಾರಣ, ಭತ್ತ-ಅಕ್ಕಿ ಇಳುವರಿ ವ್ಯತ್ಯಾಸ, ಹೊಸದಾಗಿ ರಚನೆಯಾದ ಗ್ರಾಮ ಪಂಚಾಯಿತಿಗಳು |
| 2016 ಹಿಂಗಾರು | 1189697 | 1187313 | 850.72 | 843815 | 672.36 | 343498 | 178.36 | ಬ್ಯಾಂಕ್ ಖಾತೆ ಲಭ್ಯವಿಲ್ಲದ ಕಾರಣ |
| 2017ಮುಂಗಾರು | 1333153 | 554106 | 611.8 | 533842 | 605.51 | 20264 | 6.29 | ಬ್ಯಾಂಕ್ ಖಾತೆ ಲಭ್ಯವಿಲ್ಲದ ಹಾಗೂ ಆಧಾರ್ ಸಮಸ್ಯೆ ಕಾರಣ |
| 2017-18 ಹಿಂಗಾರು ಮತ್ತು ಬೇಸಿಗೆ | 22921 | 8981 | 10.50 | 6936 | 9.91 | 2045 | 0.59 | ಬ್ಯಾಂಕ್ ಖಾತೆ ಲಭ್ಯವಿಲ್ಲದ ಕಾರಣ |
| 2018ಮುಂಗಾರು | 1222988 | 795351 | 1557.59 | ಬೆಳೆ ವಿಮೆ ಇತ್ಯರ್ಥ ಕಾರ್ಯ ಪ್ರಗತಿಯಲ್ಲಿರುತ್ತದೆ. | | | | |
| 2018-19 ಹಿಂಗಾರು ಮತ್ತು ಬೇಸಿಗೆ | 467489 | | | ಬೆಳೆ ಕಟಾವು ಫಲಿತಾಂಶದ ವರದಿ ಸ್ವೀಕೃತವಾದ ನಂತರ ಪರಿಹಾರ ಇತ್ಯರ್ಥಪಡಿಸಲಾಗುವುದು. | | | | |
| 2019ಮುಂಗಾರು (19-07-2019 ರವರೆಗೆ) | 2.51 | | | ನೋಂದಣಿ ಪ್ರಕ್ರಿಯೆ ಪ್ರಗತಿಯಲ್ಲಿದೆ. | | | | |

**ಟಿಪ್ಪಣಿ:** ನೋಂದಣಿಯಾಗಿಯೂ ವಿಮೆ ಪರಿಹಾರಕ್ಕೆ ಅರ್ಹರಾಗದಿರಲು ಕಾರಣವೇನೆಂದರೆ 'ಸಂಬಂಧಿಸಿದ ವಿಮಾ ಘಟಕದಲ್ಲಿ ವಾಸ್ತವಿಕ ಇಳುವರಿಯು(CCE yield) ಪ್ರಾರಂಭಿಕ ಇಳುವರಿಗಿಂತ(Threshold yield) ಹೆಚ್ಚಾಗಿ ಇದ್ದರೆ, ಇಳುವರಿ ಆಧಾರಿತ(CCE Compensation) ವಿಮೆ ಪರಿಹಾರ ಮೊತ್ತ ದೊರಕುವುದಿಲ್ಲ.

ಕೃಷಿ ಆಯುಕ್ತರು